# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ ಎನ್ ಎಸ್ - 19

3ನೇ ವರ್ಷ 41ನೇ ಸಂಚಿಕೆ ಕೊಪ್ಪ 14-7-1985 ಭಾನುವಾರ ಬೆಲೆ 40 ಪೈಸೆ


## ಸರ್ಕಾರಿ ಆಸ್ಪತ್ರೆಗೆ ಅತಿ ಕಳಪೆ ವಸ್ತುಗಳ ಪೂರೈಕೆಗೆ ಟೆಂಡರ್?

ಸರ್ಕಾರಿ ಆಸ್ಪತ್ರೆಗೆ ಸರಬರಾಜು ಮಾಡುವ ಹಾಲು, ಹಣ್ಣು, ಬ್ರೆಡ್‌ಗಳ ಗುಣಮಟ್ಟ ಹೇಗಿರಬೇಕು? "ಅತ್ಯುತ್ತಮವಾಗಿರಬೇಕು" ಎಂದು ಯಾವ ಮಗುವಾದರೂ ಹೇಳೀತು.

ಆದರೆ ಸರ್ಕಾರ ಇದನ್ನು ಖಂಡಿತ ವಿರೋಧಿಸಬಹುದು. ಯಾರೂ, ಎಂಥ ಕಡುದುಷ್ಟ ಲೋಭಿಯೂ ಸರಬರಾಜು ಮಾಡಲಾರದಂಥ ಅತಿ ಕಳಪೆ ವಸ್ತುಗಳನ್ನು ಆಸ್ಪತ್ರೆಗೆ ಒದಗಿಸಬೇಕೆಂದು ಅದು ಹೇಳಬಹುದು.

ಇದು 'ವಿಚಿತ್ರವಾದರೂ ಸತ್ಯ.' ಬೇಕಾದರೆ ಸರ್ಕಾರದ ಆರೋಗ್ಯ ಇಲಾಖೆಯು ಮೈಸೂರು ವಿಭಾಗದ ಜಂಟಿ ನಿರ್ದೇಶಕರು ಕೊಪ್ಪ ಸರ್ಕಾರಿ ಆಸ್ಪತ್ರೆಗೆ ಈ ಐಟಂಗಳ ಪೂರೈಕೆಗಾಗಿ ಕರೆದಿರುವ ಟೆಂಡರ್ ನೋಡಿ.

### ಇದು ಅವರ ಟೆಂಡರ್

| | | |
|---|---|---|
| ಬಾಳೆಹಣ್ಣು – | ಕಿಲೋ | 3.30 ರೂ. |
| ಬ್ರೆಡ್ (ಮೊದಲ ದರ್ಜೆ) | " | 3.90 ರೂ. |
| ಬೆಲ್ಲ | ಕಿಲೋ | 4.00 ರೂ. |
| ಹಾಲು | ಲೀ. | 2.35 ರೂ. |

ಈ ದರಗಳಲ್ಲಿ ಯಾವ ಯಾವ ವಸ್ತು

| | | |
|---|---|---|
| ಕಾಫೀ ಪುಡಿ | " | 17.90 ರೂ. |
| ಸೌದೆ (ಒಡೆದದ್ದು) | " | 0.39 ಪೈ. |

ಗಳನ್ನು ಪೂರೈಸಬಹುದು?

ಬಾಳೆಹಣ್ಣು ಕನಿಷ್ಠ ದರ್ಜೆಯದು ಕಿಲೋಗೆ 8 ರಿಂದ 10 ರೂ. ಆಗುತ್ತದೆ. ಹಾಲು—ಸರ್ಕಾರವೇ ಲೀಟರಿಗೆ 4 ರೂ. ಮಾಡಿದೆ. ಇನ್ನೂ ವಿಶೇಷವೆಂದರೆ ಕಳೆದ ವರ್ಷದ ಟೆಂಡರ್‌ನಲ್ಲಿ ಲೀಟರಿಗೆ 2.40 ಕೊಡಲಾಗಿತ್ತು. ಈ ವರ್ಷ ಹಾಲಿನ ದರ ಇಳಿದಿದೆ! ಕಾಫಿ ಪುಡಿ ಒಳ್ಳೆಯದು 26 ರೂ. ಇದೆ. ಚಿಕೋರಿ ಹೆಚ್ಚು ಮಾಡಿದರೆ 24 ರೂ. ಅದಕ್ಕಿಂತ ಕಳಪೆ ದರ್ಜೆಯದನ್ನು ಯಾವ ವ್ಯಾಪಾರಿಯೂ ಮಾರುವುದಿಲ್ಲ. ಬರೀ ಚಿಕೋರಿಯನ್ನೇ ಕಾಫಿ ಪುಡಿಯೆಂದು 17.90 ಕ್ಕೆ ಮಾರಬೇಕೋ ಏನೋ! ಬ್ರೆಡ್, ಬೆಲ್ಲ ಮತ್ತು ಸೌದೆ– ಇವುಗಳಿಗೆ ಮಾತ್ರ ಒಂದು ಯೋಗ್ಯವಾದ ಬೆಲೆ ಕೊಡಲಾಗಿದೆ ಎನ್ನಬಹುದು.

### ತಲೆ ಕೆಟ್ಟಿಗಿದೆಯೆ ?

ಇಂಥ ದರಗಳನ್ನು ನೋಡುವಾಗ ಸರ್ಕಾರದ ಈ ಇಲಾಖೆಗಳ ಮುಖ್ಯಸ್ಥರಿಗೆ ತಲೆ ಕೆಟ್ಟಿಗಿದೆಯೆ? ಎಂದು ಅನ್ನಿಸುತ್ತದೆ. ವಿದ್ಯುಚ್ಛಕ್ತಿ, ಲೋಕೋಪಯೋಗಿ ಇಲಾಖೆಗಳಲ್ಲಿ, ಅಂಚೆ-ತಂತಿ ಇಲಾಖೆಗಳ ದಿನಗೂಲಿಯೂ ಹೀಗೆಯೇ. ಚಾಲ್ತಿ ದರ ಅರ್ಧಕ್ಕಿಂತಲೂ ಕಮ್ಮಿಯಿರುತ್ತದೆ. ಈ ಸಂದರ್ಭದಲ್ಲೆಲ್ಲ ಖರ್ಚು ತೂಗಿಸಬೇಕಾದರೆ ಸುಳ್ಳು ಲೆಕ್ಕ ತಾನೇ ಕೊಡಬೇಕು? ಒಂದು ಖರ್ಚು ಮಾಡಿ ಎರಡು ಎಂದು ಲೆಕ್ಕ ಕೊಟ್ಟವನು ಮೂರು ಎಂದೂ ಕೊಡುತ್ತಾ ಅವ್ಯವಹಾರಕ್ಕೆ ದಾರಿಯಾಗುವುದು ಹೇಗೆ ಅಂತ?

ಕೊಪ್ಪದಲ್ಲಿ ಗಿಡ ನೆಡುವ ಲವಲವಿಕೆಯ ಕಾರ್ಯಕ್ರಮ

## ಪರಿಸರ ಶುದ್ಧಿಗಾಗಿ ಅರಣ್ಯ ಬೆಳೆಸಲು ಕರೆ

**ಕೊಪ್ಪ: ಇಲ್ಲಿನ ಲಯನ್ಸ್ ಕ್ಲಬ್ ಮತ್ತು ಅರಣ್ಯ ಇಲಾಖೆಗಳ ಸಂಯುಕ್ತ ಆಶ್ರಯದಲ್ಲಿ 39 ನೇ ವನ ಮಹೋತ್ಸವದ ಪ್ರಯುಕ್ತ ಅಧಿಕ ಪ್ರಮಾಣದಲ್ಲಿ ಗಿಡ ನೆಡುವ ಕಾರ್ಯಕ್ರಮ ಒಳ್ಳೆಯ ಲವಲವಿಕೆಯ ವಾತಾವರಣದಲ್ಲಿ ನಡೆಯಿತು.**

ಕೊಪ್ಪ ಎಸ್ಟೇಟ್ ಬಳಿಯ ಸುಮಾರು 6 ಎಕರೆ ವಿಸ್ತೀರ್ಣದ ಸರ್ಕಾರಿ ಜಾಗದಲ್ಲಿ ಸಾಮಾಜಿಕ ಅರಣ್ಯ ಬೆಳೆಸಲು ಯೋಜಿಸಿರುವ ತಾಣದಲ್ಲಿ ಗಿಡಗಳನ್ನು ನೆಡುವ ಮೂಲಕ ಮಂತ್ರಿ ಗೋವಿಂದ ಗೌಡರು ಕಾರ್ಯಕ್ರಮ ಉದ್ಘಾಟಿಸಿದರು. ಸರ್ಕಾರಿ ಸಿಬ್ಬಂದಿ, ಲಯನ್ಸ್ ಸದಸ್ಯರು ಮತ್ತು ಸಾರ್ವಜನಿಕರು(ಮಹಿಳೆಯರೂ) ಸೇರಿದಂತೆ ಸುಮಾರು ಒಂದು ನೂರು ಜನ ಸಾಂಕೇತಿಕವಾಗಿ ಸಸಿಗಳನ್ನು ನೆಟ್ಟರು. (ಉಳಿದುದನ್ನು ಇಲಾಖೆ ನೆಡಿಸುತ್ತದೆ.)

ಅನಂತರ ಪುರಭವನದಲ್ಲಿ ಶ್ರೀಮತಿ ಶೀಲಾ ಗುರ್ಜರ್‌ರವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಕನ್ನಡದಲ್ಲಿ ಸ್ವಾಗತ ಭಾಷಣ ಮಾಡಿದ ಡಿ. ಎಫ್. ಒ. ವಿನಯ್ ಲೂಥ್ರ, ವನಮಹೋತ್ಸವಗಳ ಬಗೆಗಿನ ಟೀಕೆಗಳನ್ನು ಪ್ರಸ್ತಾಪಿಸಿ, ಪ್ರತಿ ವರ್ಷವೂ ಕೆಲವು ಸಾವಿರ ಎಕರೆ ಪ್ರದೇಶದಲ್ಲಿ ಅರಣ್ಯ ಇಲಾಖೆ ಸಸಿಗಳನ್ನು ನೆಟ್ಟು ಅವುಗಳ ರಕ್ಷಣೆಗೆ ಕಾವಲುಗಾರರನ್ನು ನೇಮಿಸುತ್ತಿದೆ. ಆದರೆ ವನಮಹೋತ್ಸವದ ಕಾರ್ಯಕ್ರಮವನ್ನು ಮಾತ್ರ ಊರಿಗೆ ಸಮೀಪವೇ ನಡೆಸುವುದಕ್ಕೆ ಕಾರಣವಿದೆ. ಮರ–ಗಿಡಗಳನ್ನು ನೆಟ್ಟು ಬೆಳೆಸುವ ಬಗ್ಗೆ ಜನರಿಗೆ ತಿಳುವಳಿಕೆ ಮೂಡಿಸುವುದು ಇದರ ಉದ್ದೇಶ. ಆದರೆ ಹಾಗೆ ನೆಡುವ ನೂರಿನ್ನೂರು ಗಿಡಗಳಿಗೆ ಕಾವಲುಗಾರರನ್ನು ನೇಮಿಸಲು ಸಾಧ್ಯವಿಲ್ಲ. ಅವುಗಳನ್ನು ರಕ್ಷಿಸಲು ಜನತೆಯ ಸಹಕಾರ ಅತ್ಯಗತ್ಯ ಎಂದರು.

ಈ ವರ್ಷ ಸಾರ್ವಜನಿಕರಿಗೆ ಹಂಚಲು 20 ಲಕ್ಷ ವಿವಿಧ ಜಾತಿಯ ಸಸಿಗಳನ್ನು ನೆಡು ತೋಪುಗಳಲ್ಲಿ ಬೆಳೆಸಲು 47 ಲಕ್ಷ ಸಸಿಗಳನ್ನೂ ಕೊಪ್ಪ ವಿಭಾಗದ ವಿವಿಧ ನರ್ಸರಿಗಳಲ್ಲಿ ಬೆಳೆಸಿರುವುದಾಗಿಯೂ ಅವರು ತಿಳಿಸಿದರು.

ಅರಣ್ಯ ಇಲಾಖೆ ಕೊಡಮಾಡಿದ ಕೃಷಿ ಉಪಕರಣಗಳನ್ನು ಪುರಸಭಾಧ್ಯಕ್ಷರ ಗೈರು ಹಾಜರಿಯಲ್ಲಿ ಬಡವರಿಗೆ ವಿತರಣೆ ಮಾಡಿ ಮಾತನಾಡಿದ ಗೋವಿಂದ ಗೌಡರು, ಕಳೆದ 35 ಕ್ಕೂ ಹೆಚ್ಚು ವರ್ಷಗಳಿಂದ ನೆಟ್ಟ ಗಿಡಗಳಲ್ಲಿ ಅರ್ಧದಷ್ಟು ಗಿಡಗಳು ಬದುಕಿದ್ದರೂ ಇವತ್ತು ನಾವು ಗಿಡ ನೆಡುವ ಕಾರ್ಯಕ್ರಮ ನಡೆಸುವ ಅಗತ್ಯ ಇರುತ್ತಿರಲಿಲ್ಲ ಎಂದು ಬಹಳ ಮಾರ್ಮಿಕವಾಗಿ ಹೇಳಿದರು. ಹೀಗೆ ಈ ವನ ಮಹೋತ್ಸವ ಕಾರ್ಯಕ್ರಮ ಯಶಸ್ವಿಯಾಗದಿರುವುದಕ್ಕೆ ಪ್ರಜೆಗಳಾದ ನಾವೇ ಕಾರಣ. ನೆಟ್ಟ ಸಸಿಗಳ ಬಹುಭಾಗ–ಶೇ. 40 ಭಾಗ – ಜಾನುವಾರುಗಳಿಂದ ನಾಶ

(ನಾಲ್ಕನೇ ಪುಟಕ್ಕೆ)

## ಸಬ್ ಇನ್ಸ್‌ಪೆಕ್ಟರನ್ನು ರಜೆಗೆ ಕಳಿಸಿದ ಪುಂಡರು

ಕೊಪ್ಪ: ಪುಂಡರ ಗುಂಪೊಂದು ಲೋಕೋಪಯೋಗಿ ಇಲಾಖೆ ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಇಂಜಿನಿಯರ್ ಚಿನ್ನಪ್ಪ ಹೆಗ್ಡೆಯವರ ಮೇಲೆ ಈಚೆಗೆ ಹಲ್ಲೆ ನಡೆಸಲು ಯತ್ನಿಸಿದ ಬಗ್ಗೆ (ನಮ್ಮ 7.7.85 ರ ಸಂಚಿಕೆ ನೋಡಿ) ಚಿನ್ನಪ್ಪ ಹೆಗ್ಡೆ ಜಿಲ್ಲಾ ಪೋಲೀಸ್ ಮುಖ್ಯಾಧಿಕಾರಿಗಳಿಗೆ ನೀಡಿದ ದೂರಿನ ಮೇಲೆ ಇಲಾಖಾ ವಿಚಾರಣೆ ನಡೆದಿದ್ದು, ಸಬ್ ಇನ್‌ಸ್ಪೆಕ್ಟರ್ ಶಶಿಕುಮಾರ್ ಜು.8 ರಿಂದ ರಜೆಯ ಮೇಲೆ ಹೋಗಿದ್ದಾರೆ. ಇದಕ್ಕೆ ಮೇಲಧಿಕಾರಿಗಳ ಆದೇಶ ಕಾರಣ ಎನ್ನಲಾಗಿದೆ.

ಅವರ ಮೇಲೆ ಕ್ರಮ ತೆಗೆದುಕೊಂಡಿದ್ದನ್ನು ಅಥವಾ ಮುಂದೆ ಅವರನ್ನು ಅಮಾನತು ಅಥವಾ ವರ್ಗ ಮಾಡುವುದನ್ನು ವಿರೋಧಿಸಿ, ಹಲ್ಲೆಕೋರರ ಗುಂಪು ಜು. 12 ರಂದು ಕೊಪ್ಪ ಬಂದ್‌ಗೆ ನಡೆಸಿದ್ದ ತಯಾರಿ ಈಗ ಚಂದ್ರಶೇಖರ್ ಅವರ ಮಧ್ಯ ಪ್ರವೇಶದಿಂದ ಸದ್ಯಕ್ಕೆ ನಿಂತಿದೆ.

ನಾಟ, ಗಂಧ ಮುಂತಾದ ಕಳ್ಳಸಾಗಣೆ, ಕುಡಿತ, ಜುಗಾರಿ, ಬಡಬಗ್ಗರಿಗೆ ಸಾಲ-ಸೋಲ ಕೊಡಿಸುವ ನೆಪದಲ್ಲಿ ಮಧ್ಯವರ್ತಿ ಶೋಷಣೆ–ಮುಂತಾದ ಸಮಾಜ ವಿರೋಧಿ ಚಟುವಟಿಕೆಗಳಲ್ಲಿ ತೊಡಗಿರುವವರು ಆಗೀಗ ನಡೆಸುವ ಪುಂಡಾಟಿಕೆಗಳನ್ನು ವಿವಿಧ ರೀತಿಯ ಹಿತಾಸಕ್ತಿಗಳು ತಮ್ಮ ಅನುಕೂಲಕ್ಕೆ ಬಳಸಿಕೊಳ್ಳಲು ಯತ್ನಿಸುವುದರಿಂದ ಉಂಟಾಗುವ ಇಂಥ ಗಂಭೀರ ಪರಿಸ್ಥಿತಿಗಳನ್ನು ಸಮರ್ಥವಾಗಿ ಅಡಗಿಸಬಲ್ಲ ಪ್ರಾಮಾಣಿಕ, ದಕ್ಷ ಪೋಲೀಸ್ ವ್ಯವಸ್ಥೆ ಇಲ್ಲಿ ಇಲ್ಲವಾಗಿದ್ದುದು ಈ ಪ್ರಕರಣದಿಂದ ಬಯಲಿಗೆ ಬಂದಿದೆ. ಈ ಬಗ್ಗೆ ತೀವ್ರ ಗಮನ ಹರಿಸುವುದಾಗಿ ಸಚಿವ ಗೋವಿಂದ ಗೌಡ 'ಮುಂಜಾವು'ಗೆ ತಿಳಿಸಿದ್ದಾರೆ.

ಈ ಮಧ್ಯೆ ಕೆಲ ಸಮಯದಿಂದ ರಜದ ಮೇಲಿದ್ದು ತಮ್ಮ ವರ್ಗಾವಣೆಗೆ ಕೊಪ್ಪ ಸರ್ಕಲ್ ಇನ್‌ಸ್ಪೆಕ್ಟರ್ ಪಂಚಾಕ್ಷರಿ ಸ್ವಾಮಿ ಅವರು ನಡೆಸಿದ ಪ್ರಯತ್ನದ ಫಲವಾಗಿ ಇಲ್ಲಿಗೆ ಸದ್ಯದಲ್ಲೇ ಬೇರೊಬ್ಬರು ಸರ್ಕಲ್ ಇನ್‌ಸ್ಪೆಕ್ಟರ್ ನೇಮಕಗೊಳ್ಳುವ ನಿರೀಕ್ಷೆಯಿದೆ.

## ಎಲ್ಲಾ ಕಚೇರಿಗಳಲ್ಲಿ ಶುಲ್ಕದ ಬೋರ್ಡ್

### —ಲಂಚ ತಡೆಗೆ ಜಿಲ್ಲಾಧಿಕಾರಿಗಳ ಯೋಜನೆ

ಕಟ್ಟಿನಮನೆ: ಸರ್ಕಾರಿ ಕಚೇರಿಗಳಲ್ಲಿ ಲಂಚ ತಪ್ಪಿಸುವ ಒಂದು ಕ್ರಮವಾಗಿ, ಆಯಾ ಕಚೇರಿಗಳಲ್ಲಿ ನಡೆಯುವ ವಿವಿಧ ಕೆಲಸಗಳಿಗೆ ನಿಗದಿ ಮಾಡಲಾಗಿರುವ ಅಧಿಕೃತ ಶುಲ್ಕವನ್ನು ಸೂಚಿಸುವ ಬೋರ್ಡುಗಳನ್ನು ಎಲ್ಲಾ ಕಚೇರಿಗಳಲ್ಲಿ ತೂಗು ಹಾಕಲಾಗುವುದೆಂದು ಜಿಲ್ಲಾಧಿಕಾರಿ ಬಿ. ಪಾರ್ಥಸಾರಥಿ ತಿಳಿಸಿದ್ದಾರೆ.

ಇಲ್ಲಿ ಜೂನ್ 29 ರಂದು ನಡೆದ ಜನಸಂಪರ್ಕ ಸಭೆಯಲ್ಲಿ ಅವರು ಈ ಉದ್ದೇಶಿತ ಯೋಜನೆಯನ್ನು ಹೊರಗೆಡಹಿದರು.

### ಕೆಲವೇ ಅಧಿಕಾರಿಗಳ ಹಾಜರಿ

ಜಿಲ್ಲಾಧಿಕಾರಿಗಳ ಈ ಜನ ಸಂಪರ್ಕ ಸಭೆಯಲ್ಲಿ ವಿದ್ಯುಚ್ಛಕ್ತಿ ಮಂಡಳಿ ಪರವಾಗಿ ಬಾಳೆಹೊನ್ನೂರು ಅ|| ಎ|| ಇಂಜಿನಿಯರ್, ನರಸಿಂಹರಾಜಪುರ ತಾಲ್ಲೂಕು ವೈದ್ಯಾಧಿಕಾರಿಗಳು ಮತ್ತು ಸ|| ಕೃಷಿ ನಿರ್ದೇಶಕರ ಹೊರತಾಗಿ ಉಳಿದ ಇಲಾಖೆಗಳ ಅಧಿಕಾರಿಗಳು ಹಾಜರಿರಲಿಲ್ಲ. ಅಲ್ಲಲ್ಲಿನ ನೌಕರರು ಮಾತ್ರ ಬಂದಿದ್ದರು.

ಸಭೆಯಲ್ಲಿ ಬಂದಿದ್ದ 47 ಅರ್ಜಿಗಳಲ್ಲಿ 27 ಅರ್ಜಿಗಳು ದರ್ಖಾಸ್ತಿಗೆ ಸಂಬಂಧಪಟ್ಟಿದ್ದವು. ಈ ಸಂದರ್ಭದಲ್ಲಿ 9 ಜನ ಹರಿಜನರಿಗೆ ಸಾಗುವಳಿ ಪತ್ರ ನೀಡಲಾಯಿತು.

ಊರಿನ ಕುಡಿವ ನೀರಿನ ಸಮಸ್ಯೆ ಬಗ್ಗೆ ಸದ್ಯಕ್ಕೆ ಊರವರು ಮಾಡಿಕೊಂಡಿರುವ ಪೈಪಿನ ವ್ಯವಸ್ಥೆಯನ್ನೇ ದುರಸ್ತಿ ಮಾಡಿಕೊಟ್ಟು ಅನಂತರ ಬೇರೆ ಖಾಯಂ ಯೋಜನೆ ಕೈಗೆತ್ತಿಕೊಳ್ಳುವುದಾಗಿ ಭರವಸೆ ಕೊಟ್ಟರು.

## ಶಿವಮೊಗ್ಗ ಅಡಿಕೆ ಪೇಟೆ

ತಾರೀಕು: 10–7–1985

| | |
|---|---|
| ಸರಕು: | 2609 – 2920 |
| ಬೆಟ್ಟೆ: | 2229 – 2430 |
| ಗೊರಬಲು: | 1659 – 1980 |

## ಸಕಲೇಶಪುರ ಏಲಕ್ಕಿ ಧ

| ವ್ಯಾಪಾರದ ತಾರೀಕು | ಗರಿಷ್ಠ ಧಾರಣೆ |
|---|---|
| 2.7.85 | 267 |
| 3.7.85 | 275 |
| 4.7.85 | 175 |
| 5.7.85 | 240 |

# ಮಲೆನಾಡಿನಲ್ಲಿ ಅರಣ್ಯ ಸಂರಕ್ಷಣೆ

— ಟಿ. ವಿ. ಎಸ್. ಹೇರಳೆ —

(30.6.85 ರ ಸಂಚಿಕೆಯಿಂದ)

— ಭಾಗ 2 —

### ಅರಣ್ಯ ರಕ್ಷಣೆಗೆ ಸಲಹೆಗಳು

1. ಪ್ರತಿ ಗ್ರಾಮದಲ್ಲಿ 25 ಎಕರೆಗೆ ಕಡಿಮೆ ಇಲ್ಲದಂತೆ ರಕ್ಷಿತ ಅರಣ್ಯ ಬೆಳೆಸಬೇಕು. ಉಳಿದ ಅರಣ್ಯಭಾಗದಿಂದ ಇದನ್ನು ಬೇರ್ಪಡಿಸಲು 2 ಅಡಿ ಅಗಲದ ಬೇಲಿ ಅಥವಾ ದಾರಿ ಮಾಡಬೇಕು. ಒಂದು ಅಡಿ ಸುತ್ತಳತೆಯಲ್ಲಿರುವ ಎಲ್ಲಾ ಜಾತಿಯ ಮರಗಳಿಗೂ ನಂಬರ್ ಹಾಕಿ ಜಾತಿ ಬರೆಯಬೇಕು. ಈ ಅರಣ್ಯ ರಕ್ಷಿಸಲು ಗ್ರಾಮದಲ್ಲಿ ಪ್ರಾಮಾಣಿಕನಾದ ಒಬ್ಬ ರೈತನನ್ನು ನಿಯಮಿಸಿ ಆತನಿಗೆ ಮರಗಳ ಲೆಕ್ಕದ ವಿವರಗಳನ್ನು ಒದಗಿಸಬೇಕು. ಮತ್ತು ಈ ಕಾರ್ಯಕ್ಕಾಗಿ ವರ್ಷವೊಂದಕ್ಕೆ ರೂ. 600–00 ಗೌರವಧನ ಕೊಡಬೇಕು. ನಂಬರ್ ಹಾಕಿರುವುದು ಜಾತಾ ಉಳಿದ ಗಿಡಗಳನ್ನು ಬೆಳೆಸಲು ಮತ್ತು ನೆಡಲು ಆವನನ್ನು ಇಲಾಖೆಯವರು ನೇಮಿಸಿಕೊಳ್ಳಬೇಕು. (ಕಂಟ್ರಾಕ್ಟ್/ದಿನಸಂಬಳದ ಆಧಾರದ ಮೇಲೆ.)

2. ಕಟ್ಟಿಗೆ ಬಗ್ಗೆ ಸಿಲ್ವರ್, ನೀಲಗಿರಿ, ಹೈಗ, ಸುರಿಗೆ, ಧೂಪ—ಈ ಮರಗಳನ್ನು ಸಾಮಾಜಿಕ ಅರಣ್ಯಗಳಲ್ಲಿ ಬೆಳೆಯಲು ಸಸಿಗಳನ್ನು ಪೂರೈಸಿ ರೈತರನ್ನು ಹುರಿದುಂಬಿಸಬೇಕು.

3. ಒಂದು ಗ್ರಾಮ ಪಂಚಾಯ್ತಿ ಪ್ರದೇಶಕ್ಕೆ ಖಾಯಂ ಆದ ಒಬ್ಬ ಗಾರ್ಡು ಇರಬೇಕು. ಇವನ ಆದೇಶ ಮತ್ತು ಸಲಹೆಗಳನ್ನು ರಕ್ಷಿತ ಅರಣ್ಯದ ಉಸ್ತುವಾರಿಗಾಗಿ ನೇಮಕವಾದವನು ಪಾಲಿಸಬೇಕು.

4. ಕಟ್ಟಿಗೆ ಬೆಳೆದುಕೊಳ್ಳಲು ಪ್ರತಿ ಕುಟುಂಬಕ್ಕೆ ಒಂದು ಎಕರೆಯಿಂದ ಮೂರು ಎಕರೆವರೆಗೆ ಜಾಗ ಗುರುತು ಮಾಡಿ ಅದರ ರಕ್ಷಣೆಗೆ ಆ ಕುಟುಂಬಕ್ಕೇ ವಹಿಸಬೇಕು.

5. ಸ್ಥಳೀಯವಾಗಿ ಬೆಳೆಯುವ ಮಾವು, ಹಲಸು, ನೇರಲೆ, ಸಂಪಿಗೆ, ಗಂಧಕರಿಗೆ, ಧೂಪ, ಬೆಳ್ಳಾಲೆ, ಈ ಜಾತಿಯ ಸಸಿ ತಯಾರಿಸಿ ರೈತರಿಗೆ ಹಂಚುವ ವ್ಯವಸ್ಥೆ ಮಾಡಬೇಕು.

6. ಗಾಳಿ–ಮಳೆಗಳಿಗೆ ಮುರಿದು ಬೀಳುವ ಮರಗಳು, ಒಣಗಿದ ಮರಗಳು ಬೆಂಕಿ ತಗುಲಿಯೋ ಅಥವಾ ಸಿಕ್ಕಾಪಟ್ಟೆ ಜನ ಕಡಿದೋ ಅಥವಾ ಯಾರೂ ಉಪಯೋಗಿಸದೇ ಅಲ್ಲೇ ಕುಂಬಾಗಿಯೋ ಉರುವಲು ಯೋಗ್ಯವಾದ ಮರಗಳು ನಾಶವಾಗುತ್ತಿವೆ. ಈ ಬಗ್ಗೆ ಪ್ರತಿ ಜನವರಿಯಲ್ಲಿ ಇಲಾಖೆಯವರು ಸರ್ವೆ ನಡೆಸಿ ಆ ರೀತಿ ಬಿದ್ದ ಮರಗಳ ಪಟ್ಟಿ ತಯಾರಿಸಿ ನಾಟಾಕ್ಕೆ ಬರುವ ಮರಗಳನ್ನು ಪ್ರತ್ಯೇಕಿಸಿ ಪಂಚಾಯ್ತಿ ವ್ಯಾಪ್ತಿಯಲ್ಲಿ ನಿರ್ಮಾಣವಾಗುವ ಸಾರ್ವಜನಿಕ ಕಟ್ಟಡಗಳು, ಜನತಾ ಮನೆಗಳು, ಪೂಜಾ ಮಂದಿರಗಳು, ಇವುಗಳಿಗೆ ರಿಯಾಯ್ತಿ ದರದಲ್ಲಿ ಕೊಡಬೇಕು. ಕಟ್ಟಿಗೆಯ ಭಾಗವನ್ನು ಪ್ರತ್ಯೇಕಿಸಿ ರೈತರಿಗೆ ಮತ್ತು ಗ್ರಾಮವಾಸಿಗಳಿಗೆ ರಿಯಾಯ್ತಿ ದರದಲ್ಲಿ ಕೊಡಬೇಕು.

7. ಕಳ್ಳ ನಾಟಾ, ಗಂಧ ಇವುಗಳು ದೊಡ್ಡ ಪ್ರಮಾಣದಲ್ಲಿ ಸೂರೆಯಾಗುತ್ತಿದ್ದು ಅಪರೂಪಕ್ಕೆ ಇಲಾಖೆಯಿಂದ ಹಿಡಿದು ಕೇಸು ಹಾಕಿದ ಸುದ್ದಿಗಳು ಕೇಳುತ್ತಿರುತ್ತವೆ. ಆದರೆ ಈ ಬಗ್ಗೆ ಶಿಕ್ಷೆ ಆದ ಸಂಖ್ಯೆ ಬಹಳಾ ಕಡಿಮೆ. ಆದ್ದರಿಂದ ಗಂಧ, ಕಳ್ಳ ನಾಟಾ, ಅರಣ್ಯ ಉತ್ಪಾದನೆಗಳ ಕಳ್ಳಸಾಗಾಣಿಕೆ ಇವುಗಳ ನಿವಾರಣೆಗೆ ಜಿಲ್ಲೆಗೊಬ್ಬರು ಸ್ಪೆಷಲ್ ಮ್ಯಾಜಿಸ್ಟ್ರೇಟರು ಇದ್ದು ಆಯಾ ವಿಭಾಗದ ಕೇಸುಗಳು ಆ ವಿಭಾಗದ ಕಛೇರಿಯಲ್ಲಿ ತೀರ್ಮಾನವಾಗುವಂತೆಯೂ ಕಾನೂನು ಬದಲಾವಣೆ ಅಗತ್ಯವಾಗಿ ಆಗಬೇಕು. ಕಳ್ಳ ನಾಟಾ ವ್ಯವಹಾರದಲ್ಲಿ ಸಿಕ್ಕಿಬಿದ್ದವರನ್ನು ಜಾಮೀನಿನ ಮೇಲೆ ಬಿಡಬಾರದು. ಒಂದು ವರ್ಷದೊಳಗೇ ಕೇಸುಗಳು ತೀರ್ಮಾನವಾಗುವಂತಿರಬೇಕು.

ಪ್ರತಿ ವರ್ಷವೂ ವಿಭಾಗದ ಅರಣ್ಯ ಇಲಾಖೆಯವರು ಕಳ್ಳ ನಾಟಾ ವ್ಯವಹಾರದಲ್ಲಿ ಸಿಕ್ಕಿಬಿದ್ದವರ ಮತ್ತು ಜುಲ್ಮಾನೆಗೆ ಒಳಗಾದವರ ಹೆಸರುಗಳನ್ನು, ಇವರುಗಳು ಮಾಡಿದ ಅಪರಾಧದ ವಿವರಗಳನ್ನು ಒಳಗೊಂಡ ಒಂದು ಕಿರು ಹೊತ್ತಿಗೆಯನ್ನು ಸಾರ್ವಜನಿಕರ ಅವಗಾಹನೆಗಾಗಿ ಬಿಡುಗಡೆ ಮಾಡಬೇಕು.

8. ಹೊಸ ಅರಣ್ಯಗಳನ್ನು ಬೆಳೆಸುವಾಗ ಆ ಜಾಗದಲ್ಲಿ ಇದ್ದ ಅರಣ್ಯವನ್ನು ಕಡಿದು ಬೆಂಕಿ ಹಾಕಿ ಸುಟ್ಟು ನಿರ್ನಾಮ ಮಾಡುವುದರ ಬದಲು ಆ ಜಾಗದ ಕುರುಚಲು ಮಾತ್ರ ಸವರಿ ಹೊಸ ಗಿಡಗಳನ್ನು ಹಾಕಬೇಕು. ಯಾವ ಕಾರಣಕ್ಕೂ ಯಾವ ಕಾಲದಲ್ಲೂ ಬೆಂಕಿ ಹಾಕಿ ಸುಡಬಾರದು.

9. ಇಲಾಖೆಯವರಿಗೆ ನಿಜವಾಗಿಯೂ ದಟ್ಟವಾದ ಅರಣ್ಯವನ್ನು ಬೆಳೆಸುವ ಅಪೇಕ್ಷೆ, ಕಾಳಜಿ ಇಲ್ಲ. ಒಂದಿಷ್ಟು ಗಿಡ ಮರಗಳನ್ನು ಬೆಳೆಯಲು, ಅಂಕಿ ಅಂಶ ತೋರಿಸುವ ಪ್ರವೃತ್ತಿ ಬೆಳೆದಿದೆ. ಈ ಪ್ರಚಾರದ ಬದಲು ಪ್ರತ್ಯಕ್ಷವಾಗಿ ಗ್ರಾಮ ಗ್ರಾಮಗಳಲ್ಲಿ ದಟ್ಟ ಅರಣ್ಯಗಳು ಬೆಳೆದು ನಿಂತರೆ ಅದೇ ಸಾರ್ವಜನಿಕ ಪ್ರಚಾರವಾದೀತು.

10. ಉತ್ತರಕನ್ನಡದ ಎಲ್ಲಾಪುರದಿಂದ ವಿಭಾಗದಿಂದ ಒಂದು ವರ್ಷಕ್ಕೆ 20–25 ಕೋಟಿ ರೂ.ಗಳ ಅರಣ್ಯ ವರಮಾನವಿರುವಾಗ ಇಡೀ ಕರ್ನಾಟಕದಲ್ಲಿ ಎಷ್ಟು ವರಮಾನವಿರಬಹುದು ಎಂಬುದನ್ನು ಸುಲಭವಾಗಿ ಯೋಚಿಸಿ ಅಂದಾಜು ಮಾಡಬಹುದಾಗಿರುತ್ತದೆ. ಪ್ರತೀ ವರ್ಷವೂ ಪ್ರತೀ ವಿಭಾಗದವರೂ ವರಮಾನ ಏರಿಸಿಕೊಂಡು ಬಡ್ತಿ, ಪ್ರಶಸ್ತಿಗಳನ್ನು ಪಡೆಯುವ ಬದಲು 10 ವರ್ಷಗಳ ಕಾಲ ಉತ್ಪತ್ತಿಯನ್ನು ಅರಣ್ಯ ಬೆಳೆಸುವುದು, ಅರಣ್ಯ ರಕ್ಷಿಸುವುದು, ಈ ಬಗ್ಗೆ ಖರ್ಚು ಮಾಡಿ ಶೇಕಡಾ 30 ಭಾಗವನ್ನು ಅರಣ್ಯವನ್ನಾಗಿಸುವ ಗುರಿಯನ್ನಿಟ್ಟುಕೊಂಡು ಪ್ರಾಮಾಣಿಕ ಶ್ರಮ ವಹಿಸುವುದು ಉತ್ತಮ.

11. ಶೃಂಗೇರಿ ತಾಲ್ಲೂಕಿನಲ್ಲಿ ದರಖಾಸ್ತು ಗಲಾಟೆ ಕಮ್ಮಿ, ಪ್ರತಿ ರೈತನ ಜಮೀನು ಪಕ್ಕದಲ್ಲೂ ರೈತನಿಂದ ರಕ್ಷಿತವಾದ ಅರಣ್ಯ ಕಣ್ಮನವನ್ನು ಸೂರೆಗೊಳ್ಳುತ್ತದೆ. ಆದ್ದರಿಂದ ರೈತನ ಸಹಕಾರವನ್ನು ಇಲಾಖೆಯವರು ಜಾಸ್ತಿ ಪಡೆದುಕೊಂಡು ತನ್ನದೇ ಅರಣ್ಯ ಎನ್ನುವ ಭಾವನೆ ರೈತನಲ್ಲಿ ಬೆಳೆಯಲು ಅಗತ್ಯವಿರುವ ಯೋಜನೆಗಳನ್ನು ರೂಪಿಸಿಕೊಳ್ಳಬೇಕು.

12. ದರಖಾಸ್ತು ಕಾನೂನನ್ನು ಬಿಗಿಗೊಳಿಸಿ ಅರಣ್ಯ ಇಲಾಖೆ ಮತ್ತು ಕಂದಾಯ ಇಲಾಖೆಯವರು ಜೊತೆಯಾಗಿ ಸ್ಥಳ

(ಮೂರನೆ ಪುಟಕ್ಕೆ)

**ಶೃಂಗೇರಿ ಅರಣ್ಯ ವಲಯದಲ್ಲಿ ಪ್ರಯಾಣ ಮಾಡುವಾಗ ಅಲ್ಲಿನ ಅರಣ್ಯಗಳು ಮನಸ್ಸಿಗೆ ಸಂತೋಷವನ್ನು ಉಂಟುಮಾಡುತ್ತವೆ ಅದಕ್ಕಿಂತಲೂ ದಟ್ಟವಾಗಿದ್ದ ಕೊಪ್ಪ ನರಸಿಂಹರಾಜಪುರ ವಲಯದ ಅರಣ್ಯಗಳು ನಾಶದ ಹಾದಿ ಹಿಡಿದಿವೆ ಎಂದರೆ ತಪ್ಪಾಗಲಾರದು.**

# ಕ್ರೀಡಾ ವಸತಿ ಶಾಲೆಗೆ ಜೆ.ಎಸ್.ಗೀತ ಆಯ್ಕೆ

ಚಿಕ್ಕಮಗಳೂರು ಹಾಗೂ ಮಂಗಳೂರುಗಳಲ್ಲಿರುವ ಮಹಿಳೆಯರ ಆಟೋಟದ 'ಕ್ರೀಡಾ ವಸತಿ ಶಾಲೆ'ಗೆ ರಾಜ್ಯದಿಂದ ಆಯ್ಕೆಯಾಗಿರುವ ಏಳು ಜನರಲ್ಲಿ ಕೊಪ್ಪದ ಜೆ. ಎಸ್. ಗೀತಾ ಕೂಡ ಒಬ್ಬಳಾಗಿದ್ದಾಳೆ. ಇಲ್ಲಿನ ವಿದ್ಯಾರ್ಥಿನಿಯರು ಉಚಿತ ಊಟ, ವಸತಿ, ಬಟ್ಟೆ, ಪುಸ್ತಕ, ಹಾಗೂ ಶಾಲಾ ಶುಲ್ಕದೊಂದಿಗೆ ವಿದ್ಯಾಭ್ಯಾಸ ಪಡೆಯುವ ಸೌಲಭ್ಯವಿದ್ದು ಕ್ರೀಡೆಯಲ್ಲಿ ತಮ್ಮ ಸಾಧನೆಯನ್ನು ಉತ್ತಮಗೊಳಿಸುತ್ತಿದ್ದರೆ ಪದವಿ ಪೂರ್ಣಗೊಳ್ಳುವವರೆವಿಗೂ ಈ ಸೌಲಭ್ಯ ಮುಂದುವರಿಯುತ್ತದೆ.

ಕೊಪ್ಪದ ಕಾನ್ವೆಂಟ್ ಪ್ರೌಢಶಾಲೆಯಿಂದ ಈ ಸಲದ ಎಸ್.ಎಸ್.ಎಲ್.ಸಿ. ಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣಳಾಗಿರುವ ಗೀತ ತನ್ನ ಓದಿನ ಜೊತೆಗೆ, ಉತ್ತಮ ಕ್ರೀಡಾಪಟುವಾಗಿರುವ ತನ್ನ ಸಹೋದರ ಜಲಂಧರ್‌ರೊಂದಿಗೆ ದೂರದ ಓಟವನ್ನು ಅಭ್ಯಾಸ ಮಾಡಿದ್ದು, ಕಳೆದ ವರ್ಷ ರಾಜ್ಯಮಟ್ಟದ ಕಿರಿಯರ ಒಲಂಪಿಕ್ ಸ್ಪರ್ಧೆಯಲ್ಲಿ 600 ಮೀ. ಓಟದಲ್ಲಿ ಪ್ರಥಮ ಸ್ಥಾನ ಗಳಿಸಿದ್ದಳು.

**(ವರದಿ: ಹ. ಅ. ಗೋಪಾಲ್.)**

---

ಪದ್ಯದಂಕಣ

### ಅಶ್ರುತ ಗಾನ

ಈ ಕಡಲ ತೀರಿದ
ಮರಳ ದಂಡೆಗಳ ಮೇಲೆ
ನೋವು ತುಂಬಿಕೊಂಡು ಬರೆದ
ನನ್ನ ಪ್ರೇಮ ಕವನವನ್ನು
ತೆರೆಗಳು ಒಯ್ಯುತ್ತವೆ
ಮತ್ತದನ್ನೇ ಹಾಡುತ್ತವೆ.
ಆದರೆ ನನ್ನ ಅಳಲಾಗಲೀ
ಸಮುದ್ರದ ಮೊರೆತವಾಗಲೀ
ಮಲೆನಾಡಿನ ನನ್ನ ಮುದ್ದು
ಸುಕೋಮಲೆಗೆ ಕೇಳುವುದೇ ಇಲ್ಲ.

—ಹುಮಾ(ಶ್ರೀ)-ಕಾರವಾರ.

---

# ಸಿಂಡಿಕೇಟ್ ಬ್ಯಾಂಕ್ ದತ್ತು ಗ್ರಾಮ ಕಲ್ಕೆರೆಯಲ್ಲಿ 'ಕೃಷಿಚಿಕಿತ್ಸಾಲಯ', ಮುಂಗಾರುಬೆಳೆಶಿಬಿರ

ಕೊಪ್ಪ: ಇಲ್ಲಿನ ಸಿಂಡಿಕೇಟ್ ಬ್ಯಾಂಕು ಕಲ್ಕೆರೆ ಪಂಚಾಯ್ತಿ ವ್ಯಾಪ್ತಿಯಲ್ಲಿನ ಗ್ರಾಮಗಳನ್ನು ದತ್ತು ತೆಗೆದುಕೊಂಡಿದ್ದು, ಅದರ ಆಶ್ರಯದಲ್ಲಿ ಜು. 1 ರಂದು ಕಲ್ಕೆರೆಯಲ್ಲಿ ಮುಂಗಾರು ಬೆಳೆಗಳ ತರಬೇತಿ ಶಿಬಿರ, ವನಮಹೋತ್ಸವದ ಪ್ರಯುಕ್ತ ಸಸಿ ಹಂಚುವಿಕೆ ಮತ್ತು 'ಕಲ್ಕೆರೆ ಕೃಷಿ ಚಿಕಿತ್ಸಾಲಯ'ದ ಉದ್ಘಾಟನ ಕಾರ್ಯಕ್ರಮಗಳು ನಡೆದವು.

ಮುಂಗಾರು ಬೆಳೆಗಳ ಬಗ್ಗೆ ರೈತರಿಗೆ ಕೊಪ್ಪದ ಕೃಷಿ ಅಧಿಕಾರಿ ರಾಜಶೇಖರ್ ವಿಶದವಾಗಿ ತಿಳಿಸಿದರು. ಅಧ್ಯಕ್ಷತೆ ವಹಿಸಿದ್ದ, ಕೃಷಿ ವಿಜ್ಞಾನ ಪದವೀಧರರೂ ಆದ ಕ್ಷೇತ್ರಾಭಿವೃದ್ಧಿ ಅಧಿಕಾರಿ ಪಿ. ಬಾಲಪ್ಪ ಅವರೂ ಕೆಲವು ಮಾಹಿತಿ ನೀಡಿದರು. ಬತ್ತದ ಬೆಳೆಗೆ ರಾಸಾಯನಿಕಗಳನ್ನು ಸಿಂಪಡಿಸುವ ಮತ್ತು ರಸಗೊಬ್ಬರ ಬಳಸುವ ಪ್ರಾತ್ಯಕ್ಷಿಕೆ ಏರ್ಪಡಿಸಲಾಗಿತ್ತು. ರೈತರು ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಂಡಿದ್ದರು. ಸಿಂಡಿಕೇಟ್ ಬ್ಯಾಂಕಿನ ಗ್ರಾಮೀಣ ಅಭಿವೃದ್ಧಿ ಅಧಿಕಾರಿ ಎಂ.ಆರ್.ವಿ. ರೆಡ್ಡಿ ಸ್ವಾಗತಿಸಿ, ಕೆ. ನರಸಿಂಹಮೂರ್ತಿ ವಂದಿಸಿದರು.

ವನಮಹೋತ್ಸವ ಹಾಗೂ ಸಿಂಡಿಕೇಟ್ ಬ್ಯಾಂಕ್ ವಜ್ರಮಹೋತ್ಸವದ ಅಂಗವಾಗಿ ಬ್ಯಾಂಕಿನ ಆಶ್ರಯದಲ್ಲಿ ಬೆಳೆಸಲಾಗಿದ್ದ ವಿವಿಧ ಜಾತಿಯ 1000 ಸಸಿಗಳನ್ನು ಟಿ.ವಿ. ನರಸಿಂಹ ಹೇರಳೆ ರೈತರಿಗೆ ಹಂಚಿದರು. ಪಿ. ಬಾಲಪ್ಪ ಅಧ್ಯಕ್ಷತೆ ವಹಿಸಿದ್ದರು.

ಸಿಂಡಿಕೇಟ್ ಕೃಷಿ ಪ್ರತಿಷ್ಠಾನದ ಆಶ್ರಯದಲ್ಲಿ ಸ್ಥಾಪಿಸಿರುವ 'ಕಲ್ಕೆರೆ ಕೃಷಿ ಚಿಕಿತ್ಸಾಲ'ಯದ ಉದ್ಘಾಟನೆ ನೆರವೇರಿಸಿದ ಸಚಿವ ಗೋವಿಂದ ಗೌಡರು, ಗ್ರಾಮೀಣ ದುರ್ಬಲ ವರ್ಗದ ಜನರು ಬ್ಯಾಂಕಿನಿಂದ ದೊರೆಯುವ ಸಾಲ-ಸೌಲಭ್ಯಗಳ ಸದುಪಯೋಗ ಪಡೆದು ತಮ್ಮ ಆರ್ಥಿಕ ಸ್ಥಿತಿ ಸುಧಾರಿಸಿಕೊಳ್ಳಬೇಕೆಂದು ಕರೆ ನೀಡಿ, ಈ ದಿಕ್ಕಿನಲ್ಲಿ ಸಿಂಡಿಕೇಟ್ ಬ್ಯಾಂಕಿನ ಸಾಧನೆಯನ್ನೂ, ಅಲ್ಲಿನ ಗ್ರಾ. ಅ. ಅಧಿಕಾರಿ ಎಂ. ಆರ್. ವಿ. ರೆಡ್ಡಿಯವರ ಉತ್ಸಾಹವನ್ನೂ ಪ್ರಶಂಸಿಸಿದರು.

ಬ್ಯಾಂಕಿನ ವಿಭಾಗೀಯ ಮ್ಯಾನೇಜರ್

(ಮೂರನೆ ಪುಟಕ್ಕೆ)

## ಸಾರಿಗೆ ಸಂಸ್ಥೆಗೆ ಧನ್ಯವಾದಗಳು!

ಶಂಕರ ಕಂಪನಿಯವರ ಒಂದು ಮಿನಿ ಬಸ್ಸು ಮಲ್ಲಂದೂರು–ಹಳ್ಳಿಬೈಲು ಮಾರ್ಗವಾಗಿ ಮುತ್ತಿನಕೊಪ್ಪ–ಆಗುಂಬೆ ಮತ್ತು ಆಗುಂಬೆ–ಮುತ್ತಿನಕೊಪ್ಪದ ಮಧ್ಯೆ ಓಡಾಡುತ್ತಿದೆ. ಮೊದಲು ದೊಡ್ಡ ಬಸ್ಸು ಓಡಾಡುತ್ತಿತ್ತು. ಈಗ ಮಿನಿ ಬಸ್ಸನ್ನು ಓಡಿಸುತ್ತಿರುವುದಕ್ಕಾಗಿ ನಾನು ಕಂಪನಿಯವರಿಗೆ ತುಂಬಾ ತುಂಬಾ ಧನ್ಯವಾದಗಳನ್ನು ಅರ್ಪಿಸುತ್ತಿದ್ದೇನೆ.

ಏಕೆಂದರೆ ಸುಮಾರು 25–26 ಸೀಟುಗಳಿರುವ ಬಸ್ಸಿನಲ್ಲಿ ಕೇವಲ 75 ರಿಂದ 100 ಜನಗಳು ಪ್ರಯಾಣಿಸುವಾಗಿನ ಮಜ ಅದು ಎಷ್ಟೊಂತ, ಆಹಾ ಅನುಭವಿಸಿಯೇ ತಿಳಿಯಬೇಕು! ಮಧ್ಯದಲ್ಲಿ ನಿಂತುಕೊಂಡರೆ ನಾಲ್ಕೂ ಕಡೆಯಿಂದ ಹಿತವಾದ ಒತ್ತಡ, ಒಬ್ಬನ ಬಾಯಿಂದ ಶುದ್ಧವಾದ ದೇಶೀಯ ಸರಾಯಿಯ ಸುವಾಸನೆ, ಇನ್ನೊಂದು ಕಡೆಯಿಂದ ಗಣೇಶ್ ಬೀಡಿಯ ಪರಿಮಳ, ಕಾಲಿನ ಮೇಲೆ ಒರಟಾದ ಚಪ್ಪಲಿ-ಬೂಟ್ಸುಗಳ ನರ್ತನ, ಮಧ್ಯದಲ್ಲಿ ಒಂದೆರಡು ಅರಳುತ್ತಿರುವ (ಜೊತೆಯಲ್ಲಿ ಮುಳ್ಳಿಲ್ಲದ) ಗುಲಾಬಿ ಹೂಗಳು. ಎರಡು ನಿಮಿಷಕ್ಕೊಮ್ಮೆ ಬ್ರೇಕ್ ಒತ್ತುವ ಡ್ರೈವರ್, ಬಸ್ಸಿನಲ್ಲಿ ಜನಗಳನ್ನು ತುಂಬುವ ಕಂಡಕ್ಟರ್‌ನ ಕುಶಲತೆ—ಇವೆಲ್ಲಾ ನನಗೆ ನಿಜವಾಗಲೂ ಬಹಳ ಅಚ್ಚು–ಮೆಚ್ಚು.

ವರುಷಕ್ಕೊಮ್ಮೆ ರಜದಲ್ಲಿ ಊರಿಗೆ ಬರುವ ನನಗೆ ನಮ್ಮೂರಿನ ಬಸ್ಸಿನಲ್ಲಿ ಪ್ರಯಾಣಿಸುವ ಅವಕಾಶ ತುಂಬಾ ಕಡಿಮೆ. ಇದಕ್ಕಾಗಿ ನನಗೆ ಬಹಳ ವ್ಯಥೆಯಾಗುತ್ತಿದೆ.

—ನಾಗರಾಜ ವೈ. ಎಸ್.
ಯಡಗೆರೆ.

## ಓದುಗರಲ್ಲಿ ಒಂದು ಮನವಿ

ಯಾರೂ ಗುರುತಿಸದ, ಸರಿಯಾಗಿ ಪ್ರಚಾರ ಸಿಗದ ಎಷ್ಟೋ ವಿಶಿಷ್ಟ ಊರುಗಳು, ಪ್ರೇಕ್ಷಣೀಯ ಸ್ಥಳಗಳು ನಮ್ಮ ಜಿಲ್ಲೆಯಲ್ಲಿವೆ; ವಿಶಿಷ್ಟ ಜನಗಳು ಇದ್ದಾರೆ. ಇಂಥವರ, ಇಂಥವುಗಳ ಕುರಿತಾಗಿ, ಪೂರ್ಣ ಮಾಹಿತಿಗಳ ಒಂದು ಲೇಖನ ಬರೆಯಲು ಉದ್ದೇಶಿಸಿದ್ದೇನೆ.

ಆದ್ದರಿಂದ ಓದುಗರು ದಯವಿಟ್ಟು ತಮ್ಮ ಪರಿಸರದಲ್ಲಿ, ಆಸುಪಾಸಿನಲ್ಲಿ ವಿಶಿಷ್ಟ ಪ್ರದೇಶ, ಪ್ರೇಕ್ಷಣೀಯ ಮತ್ತು ಐತಿಹಾಸಿಕ ಸ್ಥಳ, ಪವಾಡ ಸದೃಶ ಸಂಭವಗಳಿದ್ದರೆ, ಅಥವಾ ವಿಶಿಷ್ಟ ಜನರಿದ್ದರೆ ಈ ಕೆಳಗಿನ ವಿಳಾಸಕ್ಕೆ ಬರೆದು ತಿಳಿಸಿದರೆ ನಿಮ್ಮ ಸಹಕಾರಕ್ಕೆ ನಾನು ಆಭಾರಿಯಾಗಿರುತ್ತೇನೆ.

ರಮೇಶ್ ಎಸ್. ವಿ.
ಬೇಗಾರು (ಅಂಚೆ)
ಶೃಂಗೇರಿ ತಾಲ್ಲೂಕು
ಚಿಕ್ಕಮಗಳೂರು ಜಿಲ್ಲೆ

## ಮಲೆನಾಡಿನಲ್ಲಿ ಅರಣ್ಯ ಸಂರಕ್ಷಣೆ

(ಎರಡನೆ ಪುಟದಿಂದ)

ಪರಿಶೀಲಿಸಿ ಖಾಲಿ ಜಾಗದ ಸರ್ವೆ ಮಾಡಿದ ನಂತರವೇ 'ಎ' ಲಿಸ್ಟಿನಲ್ಲಿ ದರಖಾಸ್ತಿಗಾಗಿ ಜಾಗ ತೆಗೆದಿಡಬೇಕು.

13. ಭೂಮಿ ಇಲ್ಲದೇ ಇರುವ ರೈತ ಕಾರ್ಮಿಕ ಕುಟುಂಬ, 2 ಎಕರೆ ಒಳಗೇ ಭೂಮಿ ಹೊಂದಿರುವ ಅತೀ ಚಿಕ್ಕ ರೈತರು ಇವರುಗಳ ಗಣತಿ ಮಾಡಿ, ದರಖಾಸ್ತಿಗೆ ಅರ್ಹತಾ ಪತ್ರವನ್ನು ತಯಾರಿಸಿ, ಅವರಿಗೆ ದರ್ಖಾಸ್ತು ಅರ್ಜಿ ಸಲ್ಲಿಸಿ ಭೂಮಿ ಪಡೆದುಕೊಳ್ಳಲು ಅವಕಾಶವನ್ನು ಕಲ್ಪಿಸಬೇಕು. ಮುಂಜೂರಾದ ಭೂಮಿಯ ಕಾಲು ಭಾಗದಲ್ಲಿ ಅರಣ್ಯ ಬೆಳೆಯುವ ಬಗ್ಗೆ ಕಡ್ಡಾಯ ಒಪ್ಪಿಗೆ ಪಡೆದುಕೊಳ್ಳಬೇಕು.

ನಾವೆಲ್ಲಾ ಮರ ಕಡಿದೇ ಮನೆ ಕಟ್ಟಿದವರು. ಆಗಿನ ಸರ್ಕಾರಿ ಧೋರಣೆಯಂತೆ ನಾವು ನಡೆದುಕೊಂಡೆವು. ಈಗ ದೇಶಕ್ಕೇ ಆಪತ್ತು ಬಂದಿರುವುದರಿಂದ ಸರ್ಕಾರದ ಅರಣ್ಯ ಬೆಳೆಸುವ, ಉಳಿಸುವ ಪ್ರಾಮಾಣಿಕ ಯೋಜನೆಗಳಿಗೆ ರೈತವರ್ಗ ಪೂರ್ಣ ಬೆಂಬಲ ಕೊಡುವುದರಲ್ಲಿ ಸಂಶಯವಿಲ್ಲ. ಈಗಲೂ ಅರಣ್ಯ ನಾಶದಲ್ಲಿ ರೈತರಲ್ಲದವರ ಪಾಲೇ ಜಾಸ್ತಿ ಎಂದರೆ ತಪ್ಪಾಗಲಾರದು. ಸರ್ಕಾರದವರು ಹೆಳೆಯ ಸರ್ಕಾರದ 'ಕೊಡಕೊಳ್ಳಲು' ಅರಣ್ಯ ಬೆಳೆಯುವ ಯೋಜನೆಯನ್ನು ರೈತನ ಸಹಕಾರವನ್ನು ಜಾಸ್ತಿ ಪಡೆದುಕೊಳ್ಳಲು ಪ್ರಯತ್ನಿಸಬೇಕು.

## ರಿಯಾಯಿತಿ ದರದಲ್ಲಿ ಕೃಷಿ ಉಪಕರಣಗಳು

ಶೃಂಗೇರಿ: ಇಲ್ಲಿನ ಕೃಷಿ ಇಲಾಖೆ ಕಚೇರಿಯಲ್ಲಿ ರೈತರಿಗೆ ಬೇಕಾಗುವ ಕಬ್ಬಿಣದ ನೇಗಿಲು, ಪಿಕಾಸಿ, ಸಬ್ಬಲ್ ಮತ್ತು ಕುಂಟಾಣಿ ಇವುಗಳನ್ನು ದಾಸ್ತಾನು ಮಾಡಲಾಗಿದ್ದು, ರೈತರಿಗೆ ಶೇ. 25 ಭಾಗ ರಿಯಾಯ್ತಿ ದರದಲ್ಲಿ ವಿತರಣೆ ಮಾಡಲಾಗುತ್ತದೆ. ರೈತರು ಈ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳಬೇಕಾಗಿ ಸಹಾಯಕ ಕೃಷಿ ನಿರ್ದೇಶಕ ರಂಗದಾಸ ಶೆಟ್ಟಿ ಕೋರಿದ್ದಾರೆ.

## ಉಚಿತ ಕಾನೂನು ನೆರವು: ಜಿಲ್ಲೆಯಲ್ಲಿ 14 ಪ್ರಕರಣ ಇತ್ಯರ್ಥ

ಎಂಟು ಸಾವಿರ ರೂ.ಗಿಂತ ಕಡಿಮೆ ವಾರ್ಷಿಕ ವರಮಾನ ಇರುವವರಿಗೆ ಉಚಿತ ಕಾನೂನು ನೆರವು ಒದಗಿಸಿಕೊಡಲು ಸರ್ಕಾರವು ರಾಜ್ಯ ಮತ್ತು ಜಿಲ್ಲಾ ಮಟ್ಟದಿಂದ ಹಿಡಿದು ಪ್ರತಿಯೊಂದು ನ್ಯಾಯಾಲಯದ ಮಟ್ಟದವರೆಗೆ ಸಮಿತಿಗಳನ್ನು ರಚಿಸಿದ್ದು ನ. ರಾ. ಪುರದಲ್ಲೂ ಸಹ ಇಂಥ ಸಮಿತಿ ಇರುವುದೆಂದು ವರದಿಯಾಗಿದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಳೆದೆರಡು ವರ್ಷಗಳಲ್ಲಿ ಉಚಿತ ಕಾನೂನು ನೆರವು ಕೋರಿದ 44 ಪ್ರಕರಣಗಳು ದಾಖಲಾಗಿದ್ದು, 14 ಪ್ರಕರಣಗಳು ಇತ್ಯರ್ಥಗೊಂಡಿವೆ. ರಾಜ್ಯದಲ್ಲಿ ದಾಖಲಾದ 15 ಸಾವಿರ ಪ್ರಕರಣಗಳಲ್ಲಿ 5 ಸಾವಿರ ಪ್ರಕರಣಗಳು ಇತ್ಯರ್ಥವಾಗಿವೆಯೆಂದು ಕಾನೂನು ಮಂತ್ರಿ ಲಕ್ಷ್ಮೀಸಾಗರ್ ತಿಳಿಸಿದ್ದಾರೆ.

ಈ ಸೌಲಭ್ಯವನ್ನು ಮೋಟಾರ್ ಅಪಘಾತ, ವರದಕ್ಷಿಣೆ ಪ್ರಕರಣ ಮುಂತಾದವುಗಳಿಗೂ ಸಹ ಒದಗಿಸಲಾಗಿದೆಯೆಂದು ಅವರು ಹೇಳಿದ್ದಾರೆ.

## ಹೆಗ್ಗಾರುಕೊಡಿಗೆ ಬಳಿ ವಿನಾಶಕರ ಭೂಕುಸಿತ: ಮೇಗೂರಿಗೆ ಸಂಪರ್ಕ ಬಂದ್

ಜಯಪುರ: ಇಲ್ಲಿಂದ ಮೇಗೂರಿಗೆ ಹೋಗುವ ಮಾರ್ಗದಲ್ಲಿ ಹೆಗ್ಗಾರುಕೊಡಿಗೆಯ ಬಳಿ ಈಗ ಎರಡು ಮೂರು ವರ್ಷಗಳಿಂದ ತೀವ್ರವಾಗಿ ನಡೆಯುತ್ತಿರುವ ಭೂ ಕುಸಿತ ಈ ಸಲ ಈ ಸಂಪರ್ಕ ರಸ್ತೆಯನ್ನೂ ಅರ್ಧ ಕಬಳಿಸಿದ್ದು, ಇಡೀ ಮೇಗೂರು ಪ್ರಾಂತ್ಯಕ್ಕೆ ರಸ್ತೆ ಸಂಪರ್ಕ ನಿರ್ನಾಮವಾಗಲಿದೆ.

ಹಾಲಿ ಓಡಾಡುತ್ತಿರುವ 2 ಬಸ್ಸಿನವರು ಹಳ್ಳಿಗರ ಸೌಕರ್ಯಕ್ಕಾಗಿ, ಮಳೆ ಇಲ್ಲದಾಗ ಮಾತ್ರ ಕಷ್ಟದಿಂದ ಅಲ್ಲಿಗೆ ಬಸ್ ಒಯ್ಯುತ್ತಿದ್ದು, ಈ ರಸ್ತೆ ಯಾವ ಕ್ಷಣದಲ್ಲಾದರೂ ಭೀಕರ ದುರಂತವನ್ನುಂಟುಮಾಡಬಹುದು.

ಇದು ಈ ಪ್ರಮಾಣಕ್ಕೆ ಬೆಳೆಯಲು ನೇರ ಕಾರಣರಾದ ಲೋಕೋಪಯೋಗಿ ಇಲಾಖೆಯ ಹಿರಿಯ ಮೇಲಧಿಕಾರಿಗಳು ತಕ್ಷಣ ಗ್ರಾಮಸ್ಥರ ಸಲಹೆ ಪಡೆದು ಬದಲಿ ವ್ಯವಸ್ಥೆ ಮಾಡಬೇಕಾಗಿದೆ.

## ಕಲ್ಕೆರೆಯಲ್ಲಿ ಕೃಷಿ ಚಿಕಿತ್ಸಾಲಯ

(ಎರಡನೆ ಪುಟದಿಂದ)

ಎಂ ಜೆ. ಶೆಟ್ಟಿ ಅಧ್ಯಕ್ಷತೆ ವಹಿಸಿದ್ದರು. ವಿಭಾಗ ಕಚೇರಿಯ ಎ.ವಿ. ಉಡುಪ ಕೃಷಿ ಚಿಕಿತ್ಸಾಲಯದ ಧ್ಯೇಯ ಧೋರಣೆ ಮತ್ತು ಕಾರ್ಯ ನಿರ್ವಹಣೆಯ ಬಗ್ಗೆ ವಿವರಿಸಿದರು.

## ಬೇಗಾರಿನಲ್ಲಿ ಜನಸಂಪರ್ಕ ಸಭೆ

(ವರದಿ: ರಮೇಶ್ ಎಸ್.ವಿ., ಬೇಗಾರು)

ಬೇಗಾರು: ಇಲ್ಲಿ ಜು.8 ರಂದು ಜಿಲ್ಲಾಧಿಕಾರಿಗಳ ಜನಸಂಪರ್ಕ ಸಭೆ ನಡೆಯಿತು. ಜನರು, ಸಮಿತಿಗಳು ನೀಡಿದ ಅರ್ಜಿಗಳಿಗೆ ಆಯಾ ಇಲಾಖೆಯ ಅಧಿಕಾರಿಗಳು ಸ್ಪಷ್ಟೀಕರಣ ನೀಡಿ ಹಲವಾರು ಭರವಸೆಗಳನ್ನು ಇತ್ತರು. ಸಾರ್ವಜನಿಕ ಸಮಸ್ಯೆಗಳನ್ನೂ ಮಂಡಿಸಲಾಗಿತ್ತು. ಆ ಪೈಕಿ ಬೇಗಾರು ಶಾಲೆಯ ಕಟ್ಟಡ, ರಂಗಮಂದಿರ, ಖಾಲಿ ಹುದ್ದೆಗಳ ಭರ್ತಿ, ಶೌಚಗೃಹದ ಅಗತ್ಯ ಇತ್ಯಾದಿ ಸೇರಿದ್ದವು.

ಲೋಕೋಪಯೋಗಿ ಇಲಾಖೆಗೆ ಸೇರಿದ ಹಲವು ರಸ್ತೆ, ಕಾಲುವೆ, ಸೇತುವೆಗಳಲ್ಲದೆ, ರಾಜ್ಯ ವ್ಯಾಪಿ ಸುದ್ದಿಮಾಡಿದ ಬೇಗಾರು ಸೇತುವೆಯನ್ನೂ ಮುಂದಿನ ಬಜೆಟಿಗೆ ಸೇರಿಸಲು ಪ್ರಯತ್ನಿಸುವುದಾಗಿ ಆ ಇಲಾಖೆ ಅಧಿಕಾರಿಗಳು ಭರವಸೆ ಕೊಟ್ಟರು. ಆಸ್ಪತ್ರೆ ಕಟ್ಟಡ ಮತ್ತಿತರ ಹಲವಾರು ಸಮಸ್ಯೆಗಳ ಬಗ್ಗೆಯೂ ಅಸ್ತು ಎಂಬ ಭರವಸೆಗಳು ಬಂದವು.

### ಜಿಲ್ಲಾಧಿಕಾರಿಗಳ ಭಾಷಣ

ಜಿಲ್ಲಾಧಿಕಾರಿಗಳು ತಮ್ಮ ಭಾಷಣದಲ್ಲಿ ಅತಿ ವಿವಾದ ಗ್ರಸ್ತ ವಸ್ತುವಾದ 'ಬಗರ್ ಹುಕುಂ' ಬಗ್ಗೆ ಮಾತನಾಡುತ್ತ ಬಗರ್ ಹುಕುಂ ಎಂಬುದು ಒಂದಲ್ಲ ಒಂದು ಹಂತದಲ್ಲಿ ನಿಲ್ಲಲೇಬೇಕು ಎಂಬ ಆಶಯ ವ್ಯಕ್ತಪಡಿಸಿದರು. ಬೇಗಾರಿಗೆ ಬಸ್ಸು ನಿಲ್ದಾಣವನ್ನು ಕೊಡಿಸಲು ಪ್ರಯತ್ನಿಸುವುದಾಗಿ ಹೇಳಿದರು. "ನಮ್ಮ ಜಿಲ್ಲೆ ಅಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನ, ಕಂದಾಯ ಮುಂತಾದ ವಿಚಾರಗಳಲ್ಲಿ ರಾಜ್ಯದಲ್ಲೇ ಪ್ರಥಮ ಸ್ಥಾನ ಪಡೆದಿದೆ" ಎಂದರು.

### ಹಾರಿಕೆಯ ಉತ್ತರ!

ಅರ್ಜಿ ಕೊಟ್ಟ ವ್ಯಕ್ತಿಯೊಬ್ಬರಿಗೆ ಜಿಲ್ಲಾಧಿಕಾರಿಗಳು "ನೀವು ಬಗರ್‌ಹುಕುಂ ಮಾಡಿದ್ದನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳಿ" ಎಂದು ಹೇಳುತ್ತಿದ್ದಾಗ, ಶ್ರೀಕಂಠ ಗೌಡರು ಎದ್ದುನಿಂತು "ಒಂದೆರಡು ಗುಂಟೆ ಬಗರ್ ಹುಕುಂ ಆದದ್ದನ್ನು ತಪ್ಪು ಎನ್ನುತ್ತೀರಿ. ಅದೇ ಎಸ್ಟೇಟಿನವರು ಎಕರೆಗಟ್ಟಲೆ ಮಾಡಿದಾಗ ನೀವು ಏನೂ ಹೇಳುವುದಿಲ್ಲವೋ?" ಎಂಬ ನ್ಯಾಯವಾದ ಪ್ರಶ್ನೆ ಕೇಳಿದಾಗ "ಎಲ್ಲರಿಗೂ ಒಂದೇ. ನೊಣ ತಿಂದು ಜಾತಿ ಕೆಡಿಸಿಕೊಂಡಂತೆ" ಎಂದು ಹಾರಿಕೆಯ ಉತ್ತರ ನೀಡಿದರು!

ಮುಖ್ಯ ಅತಿಥಿಯಾಗಿದ್ದ ತಹಶೀಲ್ದಾರ್ ಎಸ್. ಕರೀಗೌಡ ಫಲಾನುಭವಿಗಳಿಗೆ ಸಾಲ ಮಂಜೂರಾತಿ ಪತ್ರಗಳನ್ನು ವಿತರಿಸಿದರು.

ಎಂ. ಆರ್. ವಿ ರೆಡ್ಡಿ ಸ್ವಾಗತಿಸಿದರು. ಬ್ಯಾಂಕಿನ ಮ್ಯಾನೇಜರ್ ಎನ್. ಎಸ್. ಶಾಸ್ತ್ರಿ ವಂದನಾರ್ಪಣೆ ಮಾಡುತ್ತ, ಈ ಚಿಕಿತ್ಸಾಲಯದ ವ್ಯಾಪ್ತಿಯಲ್ಲಿರುವ ರೈತರಿಗೆ ಒಂದೂವರೆಲಕ್ಷ ರೂ. ಸಾಲವನ್ನು ಒಂದೇ ದಿನದಲ್ಲಿ ಮಂಜೂರು ಮಾಡಿರುವುದಾಗಿ ತಿಳಿಸಿದರು.

## "ಟ್ರೈಸಂ" ತರಬೇತಿಗೆ ಅರ್ಜಿ ಆಹ್ವಾನ

ಜಿಲ್ಲಾ ಕೈಗಾರಿಕಾ ಕೇಂದ್ರ ಉಪ ವಿಭಾಗ, ಚಿಕ್ಕಮಗಳೂರು ಮತ್ತು ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಚಿಕ್ಕಮಗಳೂರು, ಇದರ ಸಂಯುಕ್ತಾಶ್ರಯದಲ್ಲಿ ಗ್ರಾಮೀಣ ಯುವಕ ಯುವತಿಯರಿಗಾಗಿ "ಟ್ರೈಸಂ" ತರಬೇತಿ ನೀಡುವ ಸಲುವಾಗಿ ಅರ್ಜಿ ಆಹ್ವಾನಿಸಲಾಗಿದೆ.

18 ರಿಂದ 35 ವರ್ಷ ವಯೋಮಿತಿಯಲ್ಲಿ ಇರುವ, ಗ್ರಾಮೀಣ ಪ್ರದೇಶದ [illegible] ವಾಗಿರುವ ಇಚ್ಛೆಯುಳ್ಳ ಅಭ್ಯರ್ಥಿಗಳು ಅರ್ಜಿಯನ್ನು 20–7–85 ರೊಳಗಾಗಿ [illegible] ಲ್ಲಿರುವ ಕಛೇರಿಗೆ ತಲುಪಿಸಬೇಕಾಗಿದೆ. ಹೆಚ್ಚಿನ ವಿವರಗಳನ್ನು ಆಯಾಯ ತಾಲ್ಲೂಕು ಕೈಗಾರಿಕಾ ವಿಸ್ತರಣಾಧಿಕಾರಿಗಳು [illegible] ವಾ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ಅಥವಾ ಗ್ರಾಮ ಸೇವಕರಿಂದ ಪಡೆಯಬಹುದಾಗಿದೆ.

## ಜಾಹೀರಾತಿಗೆ 'ಮುಂಜಾವು' ಅತ್ಯುತ್ತಮ ಮಾಧ್ಯಮ

## ಮೆಣಸಿನಹಾಡ್ಯದಲ್ಲಿ ಗಿರಿಜನ ರೈತರಿಗೆ ಏಲಕ್ಕಿ ಸಸಿ ಹಂಚಿಕೆ

ಬಸರಿಕಟ್ಟೆ: ಇಲ್ಲಿಗೆ ಸಮೀಪದ ಮೆಣಸಿನ ಹಾಡ್ಯದಲ್ಲಿ ಜು. 9 ರಂದು ತೀವ್ರ ಗಿರಿಜನಾಭಿವೃದ್ಧಿ ಯೋಜನೆಯಡಿ ಐದು ಜನ ಗಿರಿಜನ ರೈತರಿಗೆ ಏಲಕ್ಕಿ ಸಸಿಗಳನ್ನು ಉಚಿತವಾಗಿ ಹಂಚಲಾಯಿತು.

**ಕನ್ನಡಿಯ ಗಂಟು**

ಗಿರಿಜನರೇ ವಾಸವಾಗಿರುವ ಈ ಹಳ್ಳಿಯ ರೈತರು ಸರ್ಕಾರದಿಂದ ದೊರಕುವ ಎಲ್ಲಾ ವಿಧದ ಸೌಲತ್ತುಗಳನ್ನೂ ಪಡೆದು ಸದುಪಯೋಗಪಡಿಸಿಕೊಳ್ಳುತ್ತ ಮಕ್ಕಳ ವಿದ್ಯಾಭ್ಯಾಸದ ಕಡೆಗೂ ತೀವ್ರ ಗಮನ ನೀಡುತ್ತಿದ್ದಾರೆ. ಆದರೆ ಹೆಚ್ಚಿನ ಸೌಲಭ್ಯಗಳು ಜಮೀನುಳ್ಳವರಿಗೆ ಮಾತ್ರ ಸಿಗುವಂಥವು. ಇಲ್ಲಿನ ಕೇವು ಕುಟುಂಬಗಳಿಗೆ ಮಾತ್ರ ಜಮೀನಿದ್ದು, 28 ಕುಟುಂಬಗಳವರಿಗಾಗಿ ದರ್ಖಾಸ್ತು ಅರ್ಜಿ ಸಲ್ಲಿಸಿ ರಿಕಾರ್ಡ್ ಆಗಿದ್ದರೂ ಮಂಜೂರಾತಿಯ ಮುಹೂರ್ತ ಮಾತ್ರ ಮುಂದಕ್ಕೆ ಹೋಗುತ್ತಲೇ ಇದೆ. ಹೀಗಾಗಿ ಸೌಕರ್ಯಗಳು ಕಾನೂನಿನ ಕಡತಗಳಲ್ಲಿದ್ದರೂ ಇಲ್ಲಿನ ಬಹುಪಾಲು ಬಡವರಿಗೆ ಕನ್ನಡಿಯ ಗಂಟೇ ಆಗಿ ಉಳಿದಿವೆ.

(ವರದಿ: ಪಿ. ಶೇಷಯ್ಯ.)

## ನಿಧನ

**ಡಾ|| ಕೃಷ್ಣ ನಾಯಕ್**

ಇಲ್ಲಿಗೆ ಸಮೀಪದ ಸಿದ್ದನಕೊಡಿಗೆಯ ರಾಮ ನಾಯಕ್ ಅವರ ಮಗ ಡಾ|| ಕೃಷ್ಣ ನಾಯಕ್ ಜು. 1 ರಂದು ಬೆಳಗ್ಗೆ ತಮ್ಮ ಮನೆಯ ಸಮೀಪದ ಬಾವಿಗೆ ಬಿದ್ದು ಮರಣ ಹೊಂದಿದ್ದಾರೆ. ಅವರಿಗೆ 41 ವರ್ಷ ವಯಸ್ಸಾಗಿತ್ತು. ಕೊಪ್ಪ ಪೋಲೀಸರು ಮಹಜರು ನಡೆಸಿದ್ದು, ಇದು ಆಕಸ್ಮಿಕ ಸಾವೆಂದು ಊಹಿಸಲಾಗಿದೆ. ಹೆಚ್ಚಿನ ತನಿಖೆ ನಡೆಯುತ್ತಿದೆ.

ಡಾ|| ಕೃಷ್ಣ ನಾಯಕ್ ಈ ಮೊದಲು ಶೃಂಗೇರಿಯಲ್ಲಿ ಸರ್ಕಾರಿ ವೈದ್ಯರಾಗಿದ್ದು ಕಳೆದ ವರ್ಷ ಕಾರ್ಗಲ್‌ಗೆ (ಜೋಗ) ವರ್ಗವಾಗಿದ್ದರು.

ಅತಿ ಹಿಂದುಳಿದ ವರ್ಗವೊಂದಕ್ಕೆ ಸೇರಿದ ಡಾ|| ನಾಯಕ್ ತಮ್ಮ ವೃತ್ತಿ ಜೀವನದ ಆರಂಭದಲ್ಲಿ ಕಟ್ಟಿನಮನೆ ಮತ್ತು ಕುಣಿಗಲ್‌ಗಳಲ್ಲಿ ಬಹಳ ವರ್ಷ ಕೆಲಸ ಮಾಡಿ ಅತ್ಯಂತ ಜನಪ್ರಿಯರಾಗಿದ್ದರು. ಆದರೆ ಈಚಿನ ವರ್ಷಗಳಲ್ಲಿ ಮದ್ಯಪಾನ ವ್ಯಸನಿಯಾಗಿ ಖ್ಯಾತಿ ಕಳೆದುಕೊಂಡಿದ್ದ ಅವರು ತಮ್ಮ ಬಾಳನ್ನು ದುರಂತದ ಅಂಚಿಗೆ ತಂದುಕೊಂಡಿದ್ದರು. ಮದ್ಯ ವ್ಯಸನವನ್ನು ತೊರೆಯುವಂತೆ ಮಾಡುವ ಆಧುನಿಕ ಚಿಕಿತ್ಸೆಗಾಗಿ ಅವರನ್ನು ಬೆಂಗಳೂರಿನ ಮಾನಸಿಕ ಆಸ್ಪತ್ರೆಗೆ ಸೇರಿಸಬೇಕೆಂಬ ಅವರ ಸ್ನೇಹಿತರ ಸಲಹೆಗೆ ಅವರ ಹಿರಿಯರು ಸೂಕ್ತ ಆಸಕ್ತಿ ವಹಿಸಲಿಲ್ಲವೆನ್ನಲಾಗಿದೆ.

ಇಲ್ಲಿನ ಸರ್ಕಾರಿ ಆಸ್ಪತ್ರೆ ಸಿಬ್ಬಂದಿ ಅವರ ಅಕಾಲ ಮರಣಕ್ಕೆ ಸಂತಾಪ ಸೂಚಿಸಿ, ಶ್ರದ್ಧಾಂಜಲಿ ಅರ್ಪಿಸಿದರು.

ಕೊಪ್ಪ: ಇಲ್ಲಿಗೆ ಸಮೀಪದ ಸುಪ್ರಸಿದ್ಧ ಚಿಟ್ಟೆಮಕ್ಕಿ ದೇವಸ್ಥಾನದ ಅರ್ಚಕರು ಮತ್ತು ಪುರೋಹಿತರಾಗಿದ್ದ ಸೋಮಭಟ್ಟ ಪಟವರ್ಧನ್ ಅವರು ಜು. 1 ರ ಬೆಳಗಿನಜಾವ ತಮ್ಮ ಮನೆಯಲ್ಲಿ ನಿಧನರಾದರು. ಕೊಪ್ಪ ಸುತ್ತಮುತ್ತ ಚಿರಪರಿಚಿತರಾಗಿದ್ದ ಅವರಿಗೆ 65 ವರ್ಷ ವಯಸ್ಸಾಗಿತ್ತು. ಅವರು ಸ್ವಲ್ಪ ಕಾಲದಿಂದ ಶ್ವಾಸಕೋಶದ ಕ್ಯಾನ್ಸರ್‌ಗೆ ತುತ್ತಾಗಿದ್ದರು.

## ಜಿಲ್ಲೆಯ ಸಮಸ್ಯೆಗಳ ನಿವಾರಣೆಯತ್ತ ತಾರಾದೇವಿಯವರ ಪ್ರಯತ್ನ

ಕೊಪ್ಪ: ಬಾಳೆಹೊನ್ನೂರು ಬಳಿಯ ಕಾಫಿ ಸಂಶೋಧನಾ ಕೇಂದ್ರದಲ್ಲಿ ಕೇಂದ್ರ ಸರ್ಕಾರದ ವತಿಯಿಂದ ಕೇಂದ್ರೀಯ ಶಾಲೆಯೊಂದನ್ನು ಮಂಜೂರು ಮಾಡಿಸಿಕೊಡುವುದಾಗಿ ಈಚೆಗೆ ಅಲ್ಲಿಗೆ ಭೇಟಿ ಕೊಟ್ಟಿದ್ದ ಸಂಸತ್ ಸದಸ್ಯೆ ತಾರಾದೇವಿ ತಿಳಿಸಿದ್ದಾರೆ.

ಅಡಿಕೆ ಬಳಸುವ ಒಂದು ಪ್ರಮುಖ ಉದ್ಯಮವಾದ ಪಾನ್ ಮಸಾಲಾ ಮೇಲೆ ಕೇಂದ್ರ ಸರ್ಕಾರವು ಕಿಲೋಗೆ 20ರೂ ಸುಂಕ ವಿಧಿಸಿದ್ದನ್ನು ತೆಗೆಯಬೇಕೆಂಬ ಅಡಿಕೆ ಬೆಳೆಗಾರರ ನಿಯೋಗದ ಮನವಿಯಂತೆ ಸಂಸತ್ಸದಸ್ಯೆಯವರು ಅರ್ಥಸಚಿವ ವಿ.ಪಿ. ಸಿಂಗ್ ಅವರನ್ನು ಭೇಟಿ ಮಾಡಿ ಈ ಸುಂಕವನ್ನು ರದ್ದು ಮಾಡಿಸಿರುವುದಾಗಿ ತಿಳಿಸಿದ್ದಾರೆ.

ಈಚೆಗೆ ಕಾಫಿಯ ಮೇಲೆ ವಿಧಿಸಿದ್ದ ರಫ್ತು ಸುಂಕವನ್ನು ಟನ್ನಿಗೆ 7,000 ರೂ.ನಿಂದ 5,000 ಕ್ಕೆ ತಗ್ಗಿಸಿರುವುದಾಗಿ ಅವರು ತಿಳಿಸಿದ್ದಾರೆ.

ಕಾಫಿಯ ಕನಿಷ್ಠ ಬಿಡುಗಡೆ ದರವನ್ನು ಕನಿಷ್ಠ 7–50 ಕ್ಕೆ ಏರಿಸಬೇಕೆಂದು ತಾವು ಅರ್ಥ ಸಚಿವರ ಜೊತೆ ಒತ್ತಾಯಿಸಿದ್ದಕ್ಕೆ ಅವರು ಒಪ್ಪಿಕೊಂಡಿರುವುದಾಗಿಯೂ ಇದರಿಂದ ಸಣ್ಣ ಬೆಳೆಗಾರರಿಗೂ ಹೆಚ್ಚಿನ ಅನುಕೂಲವಾಗಲಿದೆಯೆಂದೂ ಅವರು ಹೇಳಿದ್ದಾರೆ.

**ಏಲಕ್ಕಿ ಧಾರಣೆ**

ಏಲಕ್ಕಿ ಮಾರುಕಟ್ಟೆಯಲ್ಲಿ ಮಧ್ಯವರ್ತಿಗಳ ದುರ್ಲಾಭ ಮತ್ತಿತರ ಕಾರಣಗಳಿಂದಾಗಿ ಧಾರಣೆ ತೀರ ತಳಮಟ್ಟಕ್ಕೆ ಕುಸಿದಿದ್ದು, ಕಿಲೋಗೆ ಕನಿಷ್ಠ 200 ರೂ. ದೊರೆಯುವಂತೆ ಮಾಡಲು ಸರ್ಕಾರ ಸೂಕ್ತ ಕ್ರಮ ಕೈಗೊಳ್ಳುವಂತೆ ಲೋಕಸಭಾ ಸದಸ್ಯೆಯವರು ಪ್ರಯತ್ನಿಸಬೇಕೆಂದು, ಏಲಕ್ಕಿ ಬೆಳೆದು ಸುಣ್ಣವಾಗುತ್ತಿರುವ ರೈತರು ಒತ್ತಾಯಿಸಿದ್ದಾರೆ.

## ಯಕ್ಷಗಾನ ತಾಳಮದ್ದಳೆ

ಶಾನುವಳ್ಳಿ: ಹರಿಹರಪುರದ ಮಲೆನಾಡು ಯಕ್ಷಗಾನ ಕಲಾ ಕೇಂದ್ರದವರ "ಪ್ರತಿ ತಿಂಗಳು ಯಕ್ಷಗಾನ" ಕಾರ್ಯಕ್ರಮದ ಪ್ರಾರಂಭೋತ್ಸವವು ಜೂನ್ 28 ರಂದು ಹಿರಿಯ ಯಕ್ಷಗಾನ ಕಲಾವಿದರಾದ ಹುಲುಗಾರು ಸುಬ್ಬರಾಯರ ಮನೆಯಲ್ಲಿ ನಡೆಯಿತು. ಪ್ರಾರಂಭದಲ್ಲಿ ಮಲೆನಾಡಿನ ಶ್ರೇಷ್ಠ ಯಕ್ಷಗಾನ ಪ್ರೇಮಿಗಳೂ ಸ್ವತಃ ಕಲಾವಿದರೂ ಆಗಿದ್ದ ಕೂತುಗೋಡು ವಿಶ್ವನಾಥ ಭಟ್ಟರಿಗೆ ಶ್ರದ್ಧಾಂಜಲಿ ಅರ್ಪಿಸಲಾಯಿತು. ನಂತರ ಹೃದಯಂಗಮವಾಗಿ ನಡೆದ ಯಕ್ಷಗಾನ ತಾಳಮದ್ದಲೆಯ ನಂತರ ಕಲಾ ಕೇಂದ್ರದ ಅಧ್ಯಕ್ಷ ರಾಮಚಂದ್ರರಾವ್ ಎಲ್ಲರಿಗೆ ವಂದಿಸಿದರು.

## ಪರಿಸರ ಶುದ್ಧಿಗೆ ಅರಣ್ಯ ಬೆಳೆಸಲು ಕರೆ

(ಮೊದಲನೇ ಪುಟದಿಂದ)

ವಾಗುತ್ತಿದೆ ಸಮೃದ್ಧ ಅರಣ್ಯಗಳು ಇಂದು ನಾಶವಾಗುತ್ತಿರುವುದರಿಂದಲೇ ಇಂಥ ಮಳೆಗಾಲದಲ್ಲೂ ರಾಜ್ಯದ ಬಹುತೇಕ ಪ್ರದೇಶಗಳು ಕ್ಷಾಮದ ದವಡೆಗೆ ಸಿಲುಕಿವೆ. ಅರಣ್ಯದ ಅವಶ್ಯಕತೆಯನ್ನು ಅರಿತು ನಾವೆಲ್ಲ ಮರಗಿಡ ಬೆಳೆಸುವಲ್ಲಿ ಸಹಕರಿಸಬೇಕು ಎಂದು ಕರೆಯಿತ್ತರು.

ಆಸಕ್ತರಿಗೆ ಉಚಿತ ಸಸಿಗಳ ವಿತರಣೆ ಮಾಡಿದ ಪುರಸಭಾ ಸದಸ್ಯೆ ಶ್ರೀಮತಿ ಜಾನಕಿ ನಾಗರಾಜ್ ಅವರು "ಮನುಷ್ಯನಿಗೆ ಗಿಡಮರಗಳು ಕೇವಲ ಸೌದೆ, ನಾಟಾಗಳಿಗಾಗಿ ಮಾತ್ರ ಅಲ್ಲ. ನಾವು ಬದುಕುವ ಪರಿಸರದ ಶುದ್ಧಿಗಾಗಿ ಮರಗಿಡಗಳು ಅತಿ ಅವಶ್ಯ. ಆದ್ದರಿಂದ ಅವಕಾಶವಿರುವ ಎಲ್ಲರೂ ತಮ್ಮ ಮನೆಯ ಸುತ್ತಮುತ್ತ ಕೆಲವಾದರೂ ಮರಗಿಡಗಳನ್ನು ಬೆಳೆಸಬೇಕು" ಎಂದರು.

ಕೊಪ್ಪ ಲಯನ್ಸ್ ಕ್ಲಬ್ ಅಧ್ಯಕ್ಷ ಪ್ರಭಾಕರ ಕಲ್ಲೆ ಮುಖ್ಯ ಅತಿಥಿಯಾಗಿದ್ದರು, ಕಾರ್ಯದರ್ಶಿ ರಾಮಣ್ಣ ವಂದನಾರ್ಪಣೆ ಮಾಡಿದರು.

- ಉಚಿತ ಸಸಿಗಳನ್ನು ಪಡೆಯಲು ಮಕ್ಕಳೂ ಸೇರಿದಂತೆ ಸಾರ್ವಜನಿಕರಿಂದ ಮಿತಿ ಮೀರಿದ ಉತ್ಸಾಹ ಕಂಡು ಬಂತು. ಸಸಿಗಳು ಮುಗಿದುಹೋಗಿ ಎಷ್ಟೋ ಜನ ನಿರಾಶರಾದರು.
- ಈ ಭೂಮಿ ಬಹಳ ಫಲವತ್ತಾಗಿದೆ. ಇಲ್ಲಿ ಗಿಡಗಳು ಬೆಳೆಯದಿರಲು ಕಾರಣವೇ ಇಲ್ಲ. ಅರಣ್ಯ ಇಲಾಖೆ ಇದನ್ನೊಂದು ಮಿಶ್ರ ಜಾತಿ ಸಸ್ಯಗಳ–ಸ್ಥಳೀಯ ಜಾತಿಗಳ–ಮಾದರಿ ಅರಣ್ಯವಾಗಿ ಬೆಳೆಸದಿದ್ದರೆ ವ್ಯರ್ಥ.

○

## ತಿದ್ದುಪಡಿ

ನಮ್ಮ 7.7.85 ರ ಸಂಚಿಕೆಯ 4 ನೇ ಪುಟದಲ್ಲಿ ಪ್ರಕಟವಾಗಿರುವ ಕೊಪ್ಪ ಪುರಸಭೆಯ ನೋಟಿಫಿಕೇಶನ್‌ನ ಷರತ್ತುಗಳು –ಸಂಖ್ಯೆ 1 ರಲ್ಲಿ (10,000) ಎಂದಿರುವ ಕಡೆ (1,000) ಎಂತಲೂ, ಷರತ್ತು–ಸಂಖ್ಯೆ 3 ರಲ್ಲಿ (1,000) ಎಂದಿರುವ ಕಡೆ (10,000) ಎಂದ ತಿದ್ದಿಕೊಳ್ಳಿ. **—ಸಂ.**

## ಮಲೆನಾಡಿಗೆ ವರವಾಗಬಲ್ಲ ತೀರ್ಥಹಳ್ಳಿ ಪಾಲಿಟೆಕ್ನಿಕ್

ತೀರ್ಥಹಳ್ಳಿ: ಈ ಕ್ಷೇತ್ರದ ಮಾಜಿ ಶಾಸಕ ಡಿ. ಬಿ. ಚಂದ್ರೇಗೌಡರು ಅಧ್ಯಕ್ಷರಾಗಿರುವ ಇಲ್ಲಿನ ಹೊಸ ಶಿಕ್ಷಣ ಸಂಸ್ಥೆ "ಸಹ್ಯಾದ್ರಿ ಟ್ರಸ್ಟ್" ಈ ಶೈಕ್ಷಣಿಕ ವರ್ಷದಿಂದಲೇ ಇಲ್ಲಿ ಪಾಲಿಟೆಕ್ನಿಕ್ ಆರಂಭಿಸಲಿದೆ. ಆಡಳಿತ ಕಚೇರಿಯ ಉದ್ಘಾಟನೆ ಜು. 18 ರಂದು ನಡೆಯಲಿದ್ದು, ತರಗತಿಗಳು ಆಗಸ್ಟ್ 15 ರಿಂದ ಸ್ಥಳೀಯ ಪ್ರಥಮ ದರ್ಜೆ ಕಾಲೇಜಿನ ಆವರಣದಲ್ಲಿ ಆರಂಭವಾಗುವುದಾಗಿ ಚಂದ್ರೇಗೌಡ ತಿಳಿಸಿದ್ದಾರೆ.

ಮಲೆನಾಡಿಗೆ ಮೊಟ್ಟ ಮೊದಲನೆಯದಾದ ಈ ಪಾಲಿಟೆಕ್ನಿಕ್ ಅನ್ನು ತರುವಲ್ಲಿ ಚಂದ್ರೇಗೌಡರು ಯಶಸ್ವಿಯಾಗಿರುವುದು ಸಂತೋಷ. ಈ ಅವಕಾಶವನ್ನು ನಮ್ಮ ಈ ಪ್ರಾಂತ್ಯದ ವಿದ್ಯಾರ್ಥಿಗಳು ಸದುಪಯೋಗಪಡಿಸಿಕೊಳ್ಳಬೇಕು. ಕೊಪ್ಪದಲ್ಲೋ ನ.ರಾ. ಪುರದಲ್ಲೋ ಇನ್ನೊಂದು ಪಾಲಿಟೆಕ್ನಿಕ್ ಆಗುವುದನ್ನಾಗಲೀ ಅಥವಾ ಶೃಂಗೇರಿಯಲ್ಲಿ ಐ.ಟಿ.ಐ. ಆಗುವುದನ್ನಾಗಲೀ ಕಾದು ಕುಳಿತುಕೊಳ್ಳಬಾರದು.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸೀಮನೆ ನಾಗರಾಜ್; ಅಚ್ಚು: ಓಣಟಿಗೆ ಅಚ್ಚುಕೂಟ, ಕೊಪ್ಪ.